# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 679

ಸದಸ್ಯರ ಹೆಸರು : ಶ್ರೀ ಬಿ.ಜಿ. ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 17-12-2021.

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕಲಬುರಗಿ ಮತ್ತು ಯಾದಗಿರಿ ಗ್ರಾಮ ಪಂಚಾಯಿತಿಗಳಲ್ಲಿ ಪಿ.ಡಿ.ಓ. ಕಾರ್ಯದರ್ಶಿ ಹಾಗೂ ಅಕೌಂಟೆಂಟ್‌ಗಳ ಕೊರತೆ ಹೆಚ್ಚಾಗಿದ್ದು ಒಬ್ಬ ಅಧಿಕಾರಿಗೆ 2-3 ಗ್ರಾಮ ಪಂಚಾಯಿತಿಗಳ ಹೊಣೆಗಾರಿಕೆ ಇರುವುದರಿಂದ ಯಾವ ಗ್ರಾಮ ಪಂಚಾಯಿತಿಗಳಲ್ಲಿಯೂ ಕೂಡ ಸಮರ್ಪಕವಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಮೇಲ್ಕಂಡ ಅಧಿಕಾರಿಗಳ ಕೊರತೆ ನಿವಾರಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ಬಂದಿದೆ.<br><br>ಕಲಬುರಗಿ ಜಿಲ್ಲೆಯಲ್ಲಿ ಒಟ್ಟು 261 ಗ್ರಾಮ ಪಂಚಾಯತಿಗಳಿದ್ದು, ಅದರಲ್ಲಿ ಪ್ರಸ್ತುತ 199 ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದಾರೆ.<br><br>ಯಾದಗಿರಿ ಜಿಲ್ಲೆಯಲ್ಲಿ ಒಟ್ಟು 122 ಗ್ರಾಮ ಪಂಚಾಯತಿಗಳಿದ್ದು, ಅದರಲ್ಲಿ ಪ್ರಸ್ತುತ 103 ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದಾರೆ.<br><br>ಮೇಲ್ಕಂಡ ಜಿಲ್ಲೆಗಳಲ್ಲಿ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಹುದ್ದೆ ಖಾಲಿ ಇರುವ ಗ್ರಾಮ ಪಂಚಾಯತಿಗಳಲ್ಲಿ ಗ್ರೇಡ್-1 ಗ್ರಾಮ ಪಂಚಾಯತಿ ಕಾರ್ಯದರ್ಶಿ ನೌಕರರಿಗೆ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಪ್ರಭಾರ ವಹಿಸಲಾಗುತ್ತಿದೆ. ಒಂದು ವೇಳೆ ಗ್ರೇಡ್-1 ಗ್ರಾಮ ಪಂಚಾಯತಿ ಕಾರ್ಯದರ್ಶಿ ಇರದಿದ್ದಲ್ಲಿ ಪಕ್ಕದ ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಅವರಿಗೆ ಹೆಚ್ಚುವರಿ ಪ್ರಭಾರ ವಹಿಸಲಾಗುತ್ತಿದೆ. |
| (ಆ) | ಪಿ.ಡಿ.ಓ ಮತ್ತು ಇತರೆ ಗ್ರಾಮ ಪಂಚಾಯಿತಿ ಸಿಬ್ಬಂದಿಗಳು ಜಿಲ್ಲಾ ಪಂಚಾಯತ್/ತಾಲ್ಲೂಕು ಪಂಚಾಯಿತಿ ಸಭೆಗಳ ನೆಪದಲ್ಲಿ ಗೈರಾಗುವ ಸಿಬ್ಬಂದಿ ಸಭೆ ಆಯೋಜಿಸಿದ ಅಧಿಕಾರಿಯವರಿಂದ ದೃಢೀಕರಣ ಪತ್ರ ಪಡೆದಿದ್ದರೆ ಅಂತಹ ನೌಕರನನ್ನು ಗ್ರಾಮ ಪಂಚಾಯಿತಿನಲ್ಲಿ ಗೈರು ಹಾಜರಿ ಎಂದು ಪರಿಗಣಿಸಿ ವೇತನ ಕಡಿತ ಮಾಡುವ ಬಗ್ಗೆ ನಿಯಮ ರೂಪಿಸಲು ಸರ್ಕಾರ ಕೈಗೊಂಡ ಕ್ರಮವೇನು; (ವಿವರ ನೀಡುವುದು) | ಜಿಲ್ಲಾ ಪಂಚಾಯತಿ / ತಾಲ್ಲೂಕು ಪಂಚಾಯತಿ ಸಭೆಗಳ ನೆಪದಲ್ಲಿ ಅನಗತ್ಯವಾಗಿ ಗ್ರಾಮ ಪಂಚಾಯತಿ ಕರ್ತವ್ಯಕ್ಕೆ ಗೈರಾಗದಂತೆ ಈಗಾಗಲೇ ಪಂಚಾಯತಿ ಅಭಿವೃದ್ಧಿ ಅಧಿಕಾರಿ ರವರಿಗೆ ನಿರ್ದೇಶನ ನೀಡಲಾಗಿದೆ. |
| (ಇ) | ಮೇಲ್ಕಂಡ ಜಿಲ್ಲೆಗಳಲ್ಲಿ ಗ್ರಾಮ ಪಂಚಾಯಿತಿಗಳ ಲೆಕ್ಕ ಪರಿಶೋಧನೆ ನಂತರ ಬರುವ ಕಂಡಿಕೆಗಳ ತಿರುವಳಿ ನಿಗಧಿತ ಅವಧಿಯಲ್ಲಿ ಮಾಡದ ಹಾಗೂ ಕಾಮಗಾರಿ ನಿರ್ವಹಿಸಿದಾಗ ಅಥವಾ ಸಾಮಾಗ್ರಿಗಳ ಖರೀದಿ ಮಾಡುವಾಗ ಹಣಕಾಸಿಗೆ ಸಂಬಂಧಿಸಿದ ನಿಖರವಾದ ದಾಖಲೆಗಳನ್ನು ಸಲ್ಲಿಸದಿದ್ದ ಸಂದರ್ಭದಲ್ಲಿ ವ್ಯತ್ಯಾಸದ ಮೊತ್ತವನ್ನು ತಪ್ಪಿತಸ್ಥ ಪಿ.ಡಿ.ಓಗಳಿಂದ ವಸೂಲಿ ಮಾಡಿ ಇವರ ಮೇಲೆ ಕ್ರಿಮಿನಲ್ ಮೊಕದ್ದಮೆ ಹೂಡಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ತಾಲ್ಲೂಕು ಪಂಚಾಯತಿ ಕಾರ್ಯನಿರ್ವಾಹಕ ಅಧಿಕಾರಿಗಳ ಹಂತದಲ್ಲಿ ಅಡ-ಹಾಕ್ ಸಮಿತಿಯಲ್ಲಿ ಪರಿಶೀಲನೆ ನಡೆಯುತ್ತಿದ್ದು, ನಿಯಮಾನುಸಾರ ಕ್ರಮ ವಹಿಸಲಾಗುತ್ತಿದೆ. |

ಸಂಖ್ಯೆ: ಗ್ರಾಅಪ 434 ಗ್ರಾಪಂಅ 2021

**(ಕೆ.ಎಸ್. ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.